# ಉಚ್ಚಾರಣೆಯ ದೋಷಗಳು: ನಮ್ಮ ತಿಳಿವಳಿಕೆ ಮತ್ತು ಪರಿಹಾರ

**ಭಾರತಿ ಪಂಡಿತ್**

ಆರಂಭಿಕ ತರಗತಿಗಳಲ್ಲಿ ಭಾಷಾ ಕಲಿಕೆಯಲ್ಲಿ ಶುದ್ಧತೆಯ ವಿಷಯವು ಶಿಕ್ಷಕರನ್ನು ಚಿಂತೆಯಾಗಿ ಕಾಡುವ ಪ್ರಮುಖ ವಿಷಯವಾಗಿದೆ. ಈ ಚಿಂತೆಯ ಕಾರಣದಿಂದಾಗಿ ಮಕ್ಕಳ ಉಚ್ಚಾರಣೆಯ ದೋಷ ಹಾಗೂ ಅದನ್ನು ಸರಿಪಡಿಸುವುದಕ್ಕಾಗಿ ಅಥವಾ ಶುದ್ಧ ಉಚ್ಚಾರಣೆಗಾಗಿ ಹಲವಾರು ರೀತಿಯ ಪ್ರಯತ್ನಗಳನ್ನು ಮಾಡಲಾಗುತ್ತದೆ. ಇಂದು ಈ ಪ್ರಯತ್ನವನ್ನು ಭಾಷಾ ಕಲಿಕೆಯ ಉದ್ದೇಶದಲ್ಲಿ ಬಹು ದೊಡ್ಡ ಅಡಚಣೆಯಾಗಿ ನೋಡಲಾಗುತ್ತಿದೆ. ಈ ಲೇಖನವು ಭಾಷಾ ಶಿಕ್ಷಣದಲ್ಲಿ ಉಚ್ಚಾರಣೆಯ ವಿವಿಧ ಸೂಚ್ಯಾರ್ಥಗಳ ಮೇಲೆ ಬೆಳಕು ಚೆಲ್ಲುವ ಜೊತೆಗೆ ಹಲವಾರು ಪ್ರಶ್ನೆಗಳನ್ನು ನಮ್ಮ ಮುಂದಿಡುತ್ತದೆ; ಉಚ್ಚಾರಣೆಯನ್ನು ನಾವು ಬಹಳ ದೊಡ್ಡ ಸಮಸ್ಯೆಯ ರೂಪದಲ್ಲಿ ನೋಡಬೇಕೇ? ಭಾಷಾ ಕಲಿಕೆಯಲ್ಲಿ ಉಚ್ಚಾರಣೆಯ ಸಮಸ್ಯೆ ಎಲ್ಲಿಂದ ಬಂದಿರಬಹುದು? ತರಗತಿಯಲ್ಲಿ ಶಿಕ್ಷಕರ ಸಂಪೂರ್ಣ ಗಮನವು ಪದಗಳ ಸರಿಯಾದ ಉಚ್ಚಾರಣೆಯ ಮೇಲೆ ಇರುವ ಬದಲಿಗೆ ಭಾಷೆಯ ಬೇರೆಲ್ಲಾ ಕೌಶಲ್ಯಗಳ ಬೆಳವಣಿಗೆಗಳ ಕಡೆಗೂ ಇರಬೇಕಲ್ಲವೇ? ಶಿಕ್ಷಕರ ಉಚ್ಚಾರಣೆಯು ಮಕ್ಕಳ ಉಚ್ಚಾರಣೆಯ ಮೇಲೂ ಪ್ರಭಾವ ಬೀರುತ್ತದೆಯೇ? ಇತ್ಯಾದಿ.ಸಂ.

**ಮುಖ ಪದಗಳು:** ಉಚ್ಚಾರಣೆ ದೋಷ, ಧ್ವನಿಪೆಟ್ಟಿಗೆ, ಧ್ವನಿಯಲ್ಲಿನ ಹೋಲಿಕೆ, ಧ್ವನಿ-ಲಿಖಿತ ಪಠ್ಯದ ಸಮನ್ವಯತೆ, ತಿದ್ದುವಿಕೆ, ಅನುಕರಣೆ, ಭಾಷಾ ಕೌಶಲ್ಯಗಳು, ಅರ್ಥಗ್ರಹಿಕೆ, ಭಾಷಾಶುದ್ಧತೆ, ಇತ್ಯಾದಿ.

***

'ಸರಿಯಾಗಿ ಹೇಳು...', 'ಸರಿಯಾಗಿ ಉಚ್ಚರಿಸು...' ಈ ರೀತಿಯ ಹೇಳಿಕೆಗಳು ಬಹುತೇಕ ಶಿಕ್ಷಕರ ಪ್ರತಿನಿತ್ಯದ ಮಾತುಕತೆಯ ಭಾಗವಾಗಿಬಿಟ್ಟಿವೆ. ಭಾಷಾ ಶಿಕ್ಷಣದ ಸಂದರ್ಭದಲ್ಲಿ ಮಕ್ಕಳು ಪದಗಳನ್ನು ಸರಿಯಾದ ರೀತಿಯಲ್ಲಿ ಉಚ್ಚಾರಣೆ ಮಾಡದೇ ಇರುವುದು ಒಂದು ದೊಡ್ಡ ತೊಂದರೆಯಾಗಿದೆ ಹಾಗೂ ಇದರಿಂದಾಗಿ ಪ್ರಾಥಮಿಕ ಮತ್ತು ಮಾಧ್ಯಮಿಕ ತರಗತಿಗಳಲ್ಲಿ ಶಿಕ್ಷಕರ ಹೆಚ್ಚಿನ ಸಮಯ ಮಕ್ಕಳ ಉಚ್ಚಾರಣೆಯ ಲೋಪಗಳನ್ನು ಸರಿಪಡಿಸುವುದರಲ್ಲೇ ಕಳೆದುಹೋಗುತ್ತದೆ.

ಹಾಗಂತ ಉಚ್ಚಾರಣೆಯ ದೋಷವನ್ನು ವಾಸ್ತವದಲ್ಲಿ ಇಷ್ಟೊಂದು ಗಂಭೀರ ಸಮಸ್ಯೆಯ ರೀತಿಯಲ್ಲಿ ನೋಡಬೇಕೇ? ಅದಕ್ಕಾಗಿ ತರಗತಿ ಶಿಕ್ಷಣಕ್ಕಾಗಿ ಲಭ್ಯವಿರುವ ಸಮಯದ ಹೆಚ್ಚಿನ ಭಾಗವನ್ನು ವ್ಯಯಿಸಬೇಕೇ ಹಾಗೂ ಅದಾದ ನಂತರವೂ ಪರಿಣಾಮವು ಶೂನ್ಯವೇ ಆದರೆ? ಯಾವುದೇ ಭಾಷೆಯನ್ನು ಮಾತನಾಡುವಾಗ ಅದರ ಸರಿಯಾದ ಉಚ್ಚಾರಣೆಯು ಪರಿಣಾಮಕಾರಿಯಾಗಿ ನಮ್ಮ ಮುಂದೆ ಬಂದು ನಿಲ್ಲುವುದರಲ್ಲಿ ಯಾವುದೇ ಅನುಮಾನವಿಲ್ಲ ಹಾಗೂ ಅದರ ಆಧಾರದ ಮೇಲೆಯೇ ಆ ವ್ಯಕ್ತಿಗೆ ಆ ಭಾಷೆಯ ಮೇಲೆ ಪ್ರಭುತ್ವ ಇದೆಯೋ, ಇಲ್ಲವೋ ಎನ್ನುವುದನ್ನು ನಾವು ನಿರ್ಧರಿಸುತ್ತೇವೆ. ಆದರೆ ಇಲ್ಲಿ ಏಳುವ ಮತ್ತೊಂದು ಪ್ರಶ್ನೆಯೆಂದರೆ, ಪದಗಳನ್ನು ಸರಿಯಾದ ರೀತಿಯಲ್ಲಿ ಉಚ್ಚರಿಸಿದರೆ ಅಥವಾ ಶುದ್ಧವಾಗಿ ಮಾತನಾಡುವುದರಿಂದಲೇ ಆ ವ್ಯಕ್ತಿಯ ಭಾಷಾ ಪಾಂಡಿತ್ಯ ನಿರ್ಧಾರಿತವಾಗುತ್ತದೆಯೇ ಹಾಗೂ ಭಾಷೆಯ ಮೇಲಿನ ಪ್ರಭುತ್ವ ತಿರಸ್ಕೃತವಾಗುತ್ತದೆಯೇ ಅಥವಾ ಈ ವಿಚಾರದಲ್ಲಿ ಇತರ ಕೆಲವು ಸಂಗತಿಗಳ ಬಗ್ಗೆ ಯೋಚಿಸುವುದು ಅವಶ್ಯಕವೇ? ಪರಿಣಾಮಕಾರಿಯಾಗಿ ಮಾತನಾಡುವುದು ಭಾಷಾ ಕೌಶಲ್ಯಗಳಲ್ಲಿ ಒಂದು ಭಾಗವಾದರೆ, ಯಾವುದೇ ವ್ಯಕ್ತಿಯು ಕೆಲವು ಪದಗಳನ್ನು ಅಶುದ್ಧವಾಗಿ ಉಚ್ಚರಿಸಿದರೂ ತನ್ನ ಭಾವನೆಯನ್ನು ಸರಿಯಾದ ರೀತಿಯಲ್ಲಿ ಹೇಳುವಲ್ಲಿ ಸಮರ್ಥನಾಗಿದ್ದರೆ, ಮಟ್ಟಸವಾದ ಮಾತುಗಳಲ್ಲಿ ತರ್ಕಬದ್ಧವಾಗಿ ವ್ಯಕ್ತಪಡಿಸಲು ಸಾಧ್ಯವಿದ್ದರೆ, ಆ ವ್ಯಕ್ತಿಯನ್ನು ನಾವು ಆಯೋಗ್ಯನೆಂದು ಭಾವಿಸುತ್ತೇವೆಯೇ?

ಉಚ್ಚಾರಣೆಯ ದೋಷದ ಬಗ್ಗೆ ಮಾತನಾಡುವ ಮೊದಲು ಭಾಷೆಯನ್ನು ಕಲಿಯುವಲ್ಲಿ ಉಚ್ಚಾರಣೆಯ ಪರಿಕಲ್ಪನೆಯು ಬಂದುದಾದರೂ ಎಲ್ಲಿಂದ ಎಂಬುದನ್ನು ನಾವು ಅರಿಯಬೇಕಿದೆ. ಪ್ರಾಚೀನ ಮೌಖಿಕ ಪರಂಪರೆಯಲ್ಲಿ ವಿವಿಧ ಭಾಷೆಗಳಲ್ಲಿ ಹೇಳಲಾಗುವ ನಿರ್ದಿಷ್ಟ ವಿಷಯಗಳನ್ನು ಕೇಳಿಸಿಕೊಂಡು ಅವನ್ನು ಯಥಾವತ್ತಾಗಿ ಮತ್ತೆ ಹೇಳುವುದೇ ಶಿಕ್ಷಣದ ಪ್ರಮುಖ ಭಾಗವಾಗಿರುತ್ತಿತ್ತು. ಇದರಲ್ಲಿ ಕೇಳಿಸಿಕೊಳ್ಳಲಾದ ವಿಷಯವು ಸಂಪೂರ್ಣವಾಗಿ ಅರ್ಥವಾಗಿರುವ ಸಂಭವನೀಯತೆಯು ಬಹಳ ಕಡಿಮೆ ಇತ್ತು. ಇಂದಿಗೂ ವಿವಿಧ ಧಾರ್ಮಿಕ ಆಚರಣೆಗಳಲ್ಲಿ ಹೇಳಲಾಗುವ ಮಂತ್ರ, ಆಯತಗಳು ಅಥವಾ ವರ್ಸಸ್‌ಗಳ ಅರ್ಥ ಅವುಗಳನ್ನು ಉಚ್ಚರಿಸುವವರಿಗೂ ಸರಿಯಾಗಿ ತಿಳಿದಿರುವುದಿಲ್ಲ.

ಹಿಂದಿನ ಬೋಧನೆಯ ವ್ಯವಸ್ಥೆಯು ಭಿನ್ನವಾಗಿತ್ತು, ಕಲಿಕೆಯ ಸಂದರ್ಭವೂ ಭಿನ್ನವಾಗಿತ್ತು, ಆದರೆ ಲಿಪಿಯು ಪ್ರಚಲಿತಗೊಂಡು ಗ್ರಂಥಗಳು ಲಿಪಿಬದ್ಧವಾದ ನಂತರವೂ ಅಂದಿನಿಂದ ಇಂದಿನವರೆಗೆ ಶಿಕ್ಷಣದ ಇದೇ ಪರಿಪಾಠ ಮಾತ್ರ ಮುಂದುವರಿದುಕೊಂಡು ಬರುತ್ತಿದೆ, ಇದರಲ್ಲಿ ಮುದ್ರಿತ ವಿಷಯಗಳ ಉಚ್ಚಾರಣೆ ಮೇಲೆ ಹೆಚ್ಚಿನ ಒತ್ತನ್ನು ನೀಡಲಾಗುತ್ತದೆ.

ವಾಸ್ತವದಲ್ಲಿ ಭಾಷಾ ತರಗತಿಯಲ್ಲಿ ಉಚ್ಚಾರಣೆಯ ಅವಶ್ಯಕತೆ ಯಾವಾಗ ಬರುತ್ತದೆ ಹಾಗೂ ಯಾಕಾಗಿ ಬರುತ್ತದೆ ಎಂಬುದನ್ನು ಎಲ್ಲ ಭಾಷಾ ಶಿಕ್ಷಕರೂ ಅರ್ಥಮಾಡಿಕೊಳ್ಳಬೇಕು. ಪ್ರಾರಂಭಿಕ ತರಗತಿಗಳಲ್ಲಿ ಮಕ್ಕಳಿಗೆ ಓದುವುದನ್ನು ಕಲಿಸುವ ಸಂದರ್ಭದಲ್ಲಿ ನಾವು ಅವರಿಗೆ ಪದಗಳ ಉಚ್ಚಾರಣೆ ಮಾಡಿ ಓದಲು ಕಲಿಸುತ್ತೇವೆ. ಇದರ ಮೂಲ ಉದ್ದೇಶವು ಅವರಿಗೆ ಧ್ವನಿ ಮತ್ತು ಅಕ್ಷರಗಳ ಪರಸ್ಪರ ಸಂಬಂಧವನ್ನು ಅರ್ಥಮಾಡಿಸುವುದು; ಅರ್ಥಾತ್ ಮಾತನಾಡುವ ಪದಗಳನ್ನು ಬರೆದಾಗ ಹೇಗೆ ಕಾಣಿಸುತ್ತವೆ ಅಥವಾ ಬರೆಯುವುದು ಹೇಗೆ ಎನ್ನುವುದನ್ನು ಮಕ್ಕಳು ಮನಗಾಣುವಂತೆ ಮಾಡುವುದಾಗಿರುತ್ತದೆ.

ಒಂದು ಬಾರಿ ಧ್ವನಿ-ಅಕ್ಷರಗಳ ಪರಸ್ಪರ ಸಂಬಂಧ ಸ್ಪಷ್ಟವಾದರೆ, ತಾವು ಕೇಳಿಸಿಕೊಳ್ಳುವ ಮಾತುಗಳನ್ನು ಹಾಗೂ ತಮ್ಮ ಮನಸ್ಸಿನಲ್ಲಿ ಯೋಚಿಸುವ ವಿಚಾರಗಳನ್ನು ಪದಗಳಲ್ಲಿ ಬರೆಯುವುದು ಮಕ್ಕಳಿಗೆ ಸುಲಭವಾಗುತ್ತದೆ. (ಉಕ್ತಲೇಖನದ ಪ್ರಕ್ರಿಯೆಯು ಇದೇ ಗ್ರಹಿಕೆಯನ್ನು ಆದರಿಸಿದೆ.) ಇದಲ್ಲದೆ ಕತೆ, ಕವಿತೆಗಳನ್ನು ಹಾವಭಾವ ಸಹಿತವಾಗಿ ಹೇಳಿಕೊಡುವುದಕ್ಕೂ ಸರಿಯಾದ ಉಚ್ಚಾರಣೆಯು ಕೆಲಸಕ್ಕೆ ಬರುತ್ತದೆ. (ಅದರಲ್ಲೂ ಸ್ಥಳೀಯ ಭಾಷೆಯ ಪದಗಳು ಹಾಗೂ ನುಡಿಗಟ್ಟುಗಳನ್ನು ಬಳಸುವುದರಿಂದ ಕತೆ, ಕವಿತೆಗಳು ಮತ್ತಷ್ಟು ರಂಜನೀಯವಾಗುತ್ತವೆ.) ಹಾಗಂತ ಸರಿಯಾದ ಉಚ್ಚಾರಣೆಯನ್ನು ಕಲಿಸುವುದಷ್ಟೇ ಭಾಷಾ ಶಿಕ್ಷಣದ ಏಕೈಕ ಉದ್ದೇಶವಲ್ಲ. ಬರೆದ ಮತ್ತು ಹೇಳಿದ ಮಾತುಗಳನ್ನು ಅರ್ಥಮಾಡಿಕೊಳ್ಳುವುದು, ಅರ್ಥಮಾಡಿಕೊಂಡು ಓದುವುದು, ತನ್ನ ಅನಿಸಿಕೆಯನ್ನು ಬರೆಯುವುದು, ವಿಶ್ಲೇಷಿಸುವುದು, ವರ್ಗೀಕರಿಸುವುದು, ತರ್ಕಿಸುವುದು, ಪ್ರಶ್ನಿಸುವುದು ಮುಂತಾದವು ಸಹ ಭಾಷಾ ಶಿಕ್ಷಣದ ಉದ್ದೇಶಗಳಾಗಿವೆ. ಇವುಗಳ ಅಭಿವೃದ್ಧಿಗಾಗಿ ಪ್ರಾಥಮಿಕ ತರಗತಿಗಳಲ್ಲಿಯೇ ಪ್ರಯತ್ನಿಸುವುದು ಅವಶ್ಯಕವಾಗಿದೆ. ಹೀಗಾಗಿ ಭಾಷಾ ತರಗತಿಯಲ್ಲಿ ಶಿಕ್ಷಕರು ತಮ್ಮ ಸಂಪೂರ್ಣ ಗಮನವನ್ನು ಕೇವಲ ಪದಗಳ ಸರಿಯಾದ ಉಚ್ಛಾರಣೆಯ ಮೇಲೆ ಕೇಂದ್ರೀಕರಿಸುವ ಬದಲು ಈ ಎಲ್ಲ ಕೌಶಲ್ಯಗಳ ಬೆಳವಣಿಗೆಗಳ ಕಡೆಗೂ ನೀಡುವುದು ಅವಶ್ಯಕವಲ್ಲವೇ?

ಭಾಷೆಯಲ್ಲಿನ ಪದಗಳ ತಪ್ಪು ಉಚ್ಚಾರಣೆಯನ್ನು ಒಪ್ಪಿಕೊಳ್ಳಬೇಕೆಂದೂ, ಅದರ ಸುಧಾರಣೆಗೆ ಪರಿಹಾರ ಮಾರ್ಗಗಳನ್ನೇ ಕಂಡುಕೊಳ್ಳಬಾರದೆಂದು ಇಲ್ಲಿ ಖಂಡಿತವಾಗಿ ಹೇಳುತ್ತಿಲ್ಲ. ಆದರೆ ಇದೆಲ್ಲಕ್ಕೂ ಮೊದಲು ಶಿಕ್ಷಕರಾಗಿರುವುದರಿಂದ ಉಚ್ಚಾರಣೆಯ ದೋಷಗಳು ಆಗುವುದಾದರೂ ಏಕೆ ಎಂಬುದನ್ನು ನಾವು ಅರ್ಥಮಾಡಿಕೊಳ್ಳಬೇಕು. ನಮಗೆಲ್ಲರಿಗೂ ಗೊತ್ತಿರುವ ಹಾಗೆ ನಮ್ಮ ಶರೀರದಲ್ಲಿನ ಧ್ವನಿಪಟ್ಟಿಗೆ ಅಥವಾ ವೋಕಲ್ ಕಾರ್ಡ್ ನ ಸಹಾಯದಿಂದ ನಾವು ಮಾತನಾಡುತ್ತೇವೆ ಹಾಗೂ ನಮ್ಮ ನಾಲಿಗೆ, ಅಂಗುಳ ಮತ್ತು ಹಲ್ಲುಗಳು ಮಾತನಾಡುವಲ್ಲಿ ಸಹಾಯ ಮಾಡುತ್ತವೆ. ನಾವು ಬಾಲ್ಯದಲ್ಲಿ ಮಾತೃಭಾಷೆಯಲ್ಲಿ ಮಾತನಾಡುವುದನ್ನು ಕಲಿಯುವಾಗ ಅದರಲ್ಲಿನ ಧ್ವನಿಗಳು, ಅವುಗಳ ಉಚ್ಚಾರಣೆಗೆ ನಮ್ಮ ಧ್ವನಿಪಟ್ಟಿಗೆ ಹಾಗೂ ನಾಲಿಗೆ ಸ್ವಾಭಾವಿಕವಾಗಿ ಹೊಂದಿಕೊಳ್ಳುತ್ತವೆ. ಮಕ್ಕಳ ವಿಷಯದಲ್ಲಿಯೂ ಹೀಗೆಯೇ ಆಗುತ್ತದೆ. ಅವರು ತಮ್ಮ ಮಾತೃಭಾಷೆಯನ್ನು ಕೇಳಿಸಿಕೊಳ್ಳುತ್ತಾ ಕಲಿಯುತ್ತಾರೆ ಹಾಗೂ ಅವರ ಧ್ವನಿಪೆಟ್ಟಿಗೆಗಳು ಆ ಭಾಷೆಯ

ಧ್ವನಿಗಳನ್ನು ಹೊರಡಿಸಲು ಪೂರಕವಾಗಿ ಹೊಂದಿಕೊಳ್ಳುತ್ತವೆ. ಅವರು ಶಾಲೆಗೆ ಬಂದಾಗ ಹೊಸ ಭಾಷೆಯೊಂದಿಗೆ ಮುಖಾಮುಖಿಯಾಗುತ್ತಾರೆ. ಒಂದು ವೇಳೆ ಮಕ್ಕಳ ಮಾತೃಭಾಷೆ ಹಾಗೂ ಶಾಲೆಯ ಭಾಷೆಯ ಧ್ವನಿಗಳಲ್ಲಿ ಬಹುತೇಕ ಒಂದೇ ಆಗಿದ್ದರೆ ಅವುಗಳನ್ನು ಉಚ್ಚರಿಸುವಲ್ಲಿ ಅವರಿಗೆ ಹೆಚ್ಚು ಸಮಸ್ಯೆಯಾಗುವುದಿಲ್ಲ. ಆದರೆ ಅವರ ಭಾಷೆಯಲ್ಲಿ ಇಲ್ಲದ ಯಾವುದಾದರೂ ಧ್ವನಿ ಇದ್ದಲ್ಲಿ ಆ ಧ್ವನಿಯನ್ನು ಉಚ್ಚರಿಸುವುದನ್ನು ಅವರು ಹೊಸತಾಗಿ ಕಲಿಯಬೇಕಾಗುತ್ತದೆ ಅಥವಾ ಬೇರೆ ಪದಗಳಲ್ಲಿ ಆ ಧ್ವನಿಗೆ ಪೂರಕವಾಗಿ ತಮ್ಮ ಧ್ವನಿಪೆಟ್ಟಿಗೆಯನ್ನು ಹೊಂದಿಸಿಕೊಳ್ಳಬೇಕಾಗುತ್ತದೆ. ಉದಾಹರಣೆಗೆ ಮರಾಠಿಯಲ್ಲಿ ಉಪಯೋಗಿಸುವ "ಳ" ಧ್ವನಿಯು ಹಿಂದಿಯಲ್ಲಿ ಇಲ್ಲ, ಅಥವಾ ಹಿಂದೀ ಭಾಷೆಯ ಮಗು ಮರಾಠಿಯಲ್ಲಿನ "ಳ" ಧ್ವನಿಯನ್ನು ಹೊಂದಿದ ಪದಗಳಲ್ಲಿ "ಲ" ರೀತಿ ಅಥವಾ "ಡ" ದ ಹಾಗೆ ಉಚ್ಚರಿಸಬಹುದು ಹಾಗೂ ಈ ಧ್ವನಿಯ ಉಚ್ಚಾರಣೆಗೆ ಶಿಕ್ಷಕರು ಎಷ್ಟೇ ಪ್ರಯತ್ನ ಮಾಡಿದರೂ ಸರಿಯಾದ ಉಚ್ಚಾರಣೆಯನ್ನು ಕಲಿಸಲು ಸಾಧ್ಯವಾಗುವುದಿಲ್ಲ. ಇದೇ ರೀತಿಯ ಸಮಸ್ಯೆಯನ್ನು ದಕ್ಷಿಣ ಭಾರತದ ಜನಗಳಲ್ಲಿಯೂ ನಾವು ಕಾಣಬಹುದಾಗಿದೆ. ಅವರು ಭ, ಫ, ಘ, ಝ ಅಕ್ಷರಗಳ ಉಚ್ಚಾರಣೆಯನ್ನು ಬ, ಪ, ಗ, ಜ ಅಕ್ಷರಗಳ ಹಾಗೆಯೇ ಉಚ್ಚರಿಸುವುದನ್ನು ಗಮನಿಸಬಹುದಾಗಿದೆ. ಇದಕ್ಕೆ ಕಾರಣ ಅವರ ಧ್ವನಿಪಟ್ಟಿಗೆ ಆ ಧ್ವನಿಗಳಿಗೆ ಹೊಂದಿಕೊಳ್ಳದಿರುವುದು ಹಾಗೂ ಅವರ ಭಾಷೆಯಲ್ಲಿ ಈ ರೀತಿಯ ಧ್ವನಿಗಳ ಬಳಕೆ ಇಲ್ಲದಿರುವುದು. ಆದ್ದರಿಂದಲೇ ಅವರು "ಘರ್" ಅನ್ನು "ಗರ್", "ಝುಂಡಾ" ಪದವನ್ನು "ಜಂಡಾ" ಎಂದೂ ಹಾಗೂ "ಭೂತ" ಪದವನ್ನು " ಬೂತ" ಎಂದು ಹೇಳುವುದು ಕಂಡುಬರುತ್ತದೆ. ಮೂಲ ಧ್ವನಿಗಳ ಜಾಗದಲ್ಲಿ ಇವುಗಳನ್ನು ಕೇಳುವುದು ಕಿರಿಕಿರಿ ಎನಿಸಬಹುದಾದರೂ "ಘರ್" ಮತ್ತು "ಗರ್" ಪದಗಳು ಪೂರ್ಣವಾಕ್ಯದ ಸಂದರ್ಭದಲ್ಲಿ ಬಂದಾಗ ಹಾಗೂ ಆ ಭಾಷೆಯಲ್ಲಿ ಆ ರೀತಿಯ ಪದಕ್ಕೆ ಬೇರೆ ಅರ್ಥವಿಲ್ಲದಿದ್ದರೆ ಅವುಗಳ ಅರ್ಥವನ್ನು ಗ್ರಹಿಸುವಲ್ಲಿ ಯಾವುದೇ ಸಮಸ್ಯೆಯಾಗುವುದಿಲ್ಲ. ಅಲ್ಲದೆ ಮಾತುಕತೆಯ ಮೂಲ ಉದ್ದೇಶವು ಅರ್ಥವನ್ನು ಗ್ರಹಿಸುವುದಾಗಿದ್ದಲ್ಲಿ ಪದದ ಉಚ್ಚಾರಣೆಯು ವ್ಯಾಕರಣಾತ್ಮಕ ದೃಷ್ಟಿಯಿಂದ ಸರಿ ಇಲ್ಲದಿದ್ದರೂ ಅದರಿಂದ ಅರ್ಥಕ್ಕೆ ವಿಶೇಷ ಅಡ್ಡಿಯೇನೂ ಉಂಟಾಗುವುದಿಲ್ಲ.

ಇದರ ಜೊತೆಜೊತೆಗೆ ಪ್ರತಿ ಭಾಷೆಯ ಪದ ರಚನೆಯು ಅದರ ನಿಯಮಗಳಿಗೆ ಅನುಗುಣವಾಗಿ ಆಗಿರುತ್ತದೆ ಎನ್ನುವುದನ್ನು ನಾವು ಗಮನಿಸಬೇಕು. ಎಲ್ಲ ಭಾಷೆಗಳಲ್ಲಿ ಪದಗಳು ಸಾಮಾನ್ಯವಾಗಿ ವ್ಯಂಜನ-ಸ್ವರ-ವ್ಯಂಜನ-ಸ್ವರದ ಕ್ರಮದಲ್ಲಿ ಜೋಡಿಸಲಾಗಿರುತ್ತದೆ. ಪದದ ಆರಂಭದಲ್ಲಿ ಒಂದು ಬಾರಿಗೆ ಎರಡಕ್ಕಿಂತಲೂ ಹೆಚ್ಚಿನ ವ್ಯಂಜನಗಳು ಬಹುಶಃ ಬರುವುದಿಲ್ಲ. ಅವುಗಳ ನಂತರ ಸ್ವರದ ಬಳಕೆಯನ್ನು ಮಾಡಲೇಬೇಕಾಗುತ್ತದೆ ಹಾಗೂ ಅದೂ ಕೂಡ ಕೆಲವು ನಿರ್ದಿಷ್ಟ ವ್ಯಂಜನಗಳು ಮಾತ್ರ ಈ ರೀತಿಯ ಬಳಕೆಯನ್ನು ಹೊಂದಿರುತ್ತವೆ. ಹಾಗಾಗಿ ಯಾವುದೇ ಭಾಷೆಯಲ್ಲಿ ಎರಡು ವ್ಯಂಜನಗಳನ್ನು ಹೊಂದಿದ ಪದಗಳು ಇಲ್ಲವಾದಲ್ಲಿ ಹಿಂದಿಯ "ಸ್ತ್ರೀ", "ಸ್ನೇಹ್", "ಸ್ನಾನ್" ಮುಂತಾದ ಪದಗಳ ಬದಲಿಗೆ ಈ ಭಾಷಿಕ ಜನರು "ಇಸ್ತರೀ", ಇಸ್ನೇಹ್ ಹಾಗೂ ಅಸ್ನಾನ್ ಅಥವಾ ಇಸ್ನಾನ್ ಎಂದು ಹೇಳುವುದು ಸಹಜವಾಗಿದೆ, ಏಕೆಂದರೆ ಅವರಿಗೆ ಎರಡು ಅಥವಾ ಮೂರು ವ್ಯಂಜನಗಳನ್ನು ಏಕಕಾಲಕ್ಕೆ ಉಚ್ಚರಿಸಲು ಸಾಧ್ಯವಾಗುವುದಿಲ್ಲ. ಇದೇ ರೀತಿ ಪಂಜಾಬಿ ಭಾಷೆಯಲ್ಲಿ ಅರ್ಧಾಕ್ಷರದಿಂದ ಆರಂಭವಾಗುವ ಪದಗಳ ಬಳಕೆ ಇರುವುದಿಲ್ಲ. ಹಾಗಾಗಿ ಆ ಭಾಷೆಯಲ್ಲಿ ವ್ಯವಹರಿಸುವ ಜನರಿಗೆ ಸ್ಟೇಶನ್, ಸ್ಕೂಲ್, ಸ್ಟಾಲ್, ಕ್ರಮ್ ಮುಂತಾದವುಗಳನ್ನು ಸಟೇಶನ್, ಸಕೂಲ್, ಸಟಾಲ್, ಕರಮ್ ಎಂದು ಉಚ್ಚರಿಸುವುದನ್ನು ಕಾಣಬಹುದಾಗಿದೆ. ಇಲ್ಲಿ ಉಚ್ಚಾರಣೆಯು ಭಿನ್ನವಾಗಿದ್ದರೂ ಅದರ ಅರ್ಥವನ್ನು ಗ್ರಹಿಸುವುದರಲ್ಲಿ ಸಮಸ್ಯೆ ಇಲ್ಲವಾದಲ್ಲಿ ಸ್ವಲ್ಪ ರಿಯಾಯಿತಿಯನ್ನು ನೀಡಬಹುದಲ್ಲವೇ?

ಇದಲ್ಲದೆ ಮತ್ತೊಂದು ಮಾತನ್ನು ನಾವು ಅರ್ಥಮಾಡಿಕೊಳ್ಳಬೇಕಿದೆ. ಒಂದು ವೇಳೆ ಮಕ್ಕಳ ಮಾತೃಭಾಷೆ ಮತ್ತು ಶಾಲೆಯ ಭಾಷೆಯಲ್ಲಿನ ಎಲ್ಲ ಧ್ವನಿಗಳೂ ಒಂದೇ ಆಗಿದ್ದರೂ ಅವರ ನೆರೆಹೊರೆಯಲ್ಲಿ, ಮನೆ ಅಥವಾ ಶಾಲೆಯಲ್ಲಿ ಕೆಲವು ಪದಗಳನ್ನು ತಪ್ಪಾಗಿ ಬಳಸುತ್ತಿದ್ದಲ್ಲಿ ಮಕ್ಕಳು ಆ ಪದಗಳನ್ನು ಅದೇ ರೀತಿ ಉಚ್ಚರಿಸುತ್ತಾರೆ. ಸ ಮತ್ತು ಶ ಬಳಕೆಯಲ್ಲಿನ ದೋಷಗಳು ಇದಕ್ಕೆ ಸಮರ್ಪಕ ಉದಾಹರಣೆಯಾಗಿದ್ದು, ಇಲ್ಲಿ ಜನರು ಶಾಲೆಯನ್ನು ಸಾಲೆ ಹಾಗೂ ಸೋಶಿಯಲ್ ಅನ್ನು ಶೋಶಿಯಲ್ ಎಂದು ಹೇಳುವುದನ್ನು ಕೇಳಿಸಿಕೊಳ್ಳುತ್ತೇವೆ. ನಮ್ಮಲ್ಲಿಯೂ ಎಷ್ಟೊಂದು ಜನ ಇಂದಿಗೂ ಈ ರೀತಿಯ

ತಪ್ಪುಗಳನ್ನು ಮಾಡುತ್ತಿರುವುದನ್ನು ಕಾಣಬಹುದಾಗಿದೆ. ಹಾಗಾದಲ್ಲಿ ನಮ್ಮ ಶಿಕ್ಷಕರು ಇದನ್ನು ಸರಿಪಡಿಸುವ ಪ್ರಯತ್ನವನ್ನು ಮಾಡಿರಲಿಲ್ಲವೇ? ಖಂಡಿತವಾಗಿಯೂ ಸಾಕಷ್ಟು ಪ್ರಯತ್ನಿಸಿದ್ದರೂ ವಿಫಲರಾದರು. ಏಕೆಂದರೆ ಬಹುಶಃ ಅವರ ಸುಧಾರಣಾ ವಿಧಾನಗಳು ಸೂಕ್ತವಾಗಿರಲಿಲ್ಲ.

ಇಲ್ಲಿ ಗಮನಾರ್ಹ ಸಂಗತಿಯೆಂದರೆ ಮಕ್ಕಳ ಉಚ್ಚಾರಣೆಗಿಂತ ಮೊದಲು ನಾವು ನಮ್ಮ ಉಚ್ಚಾರಣೆಯನ್ನು ಸರಿಪಡಿಸಿಕೊಳ್ಳಬೇಕು. ಏಕೆಂದರೆ ಹಿಂದಿಯನ್ನು ಹೇಗೆ ಮಾತನಾಡಲಾಗುವುದೋ ಅದೇ ರೀತಿ ಬರೆಯಲಾಗುವುದು ಎಂದು ಶಿಕ್ಷಕರಾದ ನಾವು ಹೆಮ್ಮೆಯಿಂದ ಹೇಳುತ್ತೇವೆ, (ಅಂತೆಯೇ ಬಹುತೇಕ ಎಲ್ಲ ಭಾರತೀಯ ಭಾಷೆಗಳ ಧ್ವನಿ ವ್ಯವಸ್ಥೆಯು ಹೀಗೆಯೇ ಇದೆ.) ಅಷ್ಟಾದರೂ ಹಿಂದಿಯ ಹಲವು ಪದಗಳನ್ನು ತಪ್ಪಾಗಿ ಉಚ್ಚರಿಸುತ್ತೇವೆ. ಸ್ಥಳೀಯ ಭಾಷೆಯ ಪ್ರಭಾವದ ಕಾರಣದಿಂದ ಈ ರೀತಿ ಆಗುವ ಸಂಭವವಿದೆ ಹಾಗೂ ಈಗ ಅದೇ ಉಚ್ಚಾರಣೆಯು ರೂಢಿಯಾಗಿಬಿಟ್ಟಿದ್ದು ನಾವು ಇಂದು ಆ ಉಚ್ಚಾರಣೆಯನ್ನೇ ಸರಿಯೆಂದು ಒಪ್ಪಿಕೊಳ್ಳುತ್ತಿದ್ದೇವೆ. ರೇಫ, ಪದೇನ್ ಹಾಗೂ ಋ ಗಳ ಧ್ವನಿಯ ವ್ಯತ್ಯಾಸವನ್ನು ನಮ್ಮ ಉಚ್ಚಾರಣೆಯಲ್ಲಿ ತರಲು ಸಾಧ್ಯವಾಗುವುದಿಲ್ಲ. ಅದೇ ರೀತಿ ಎ ಮತ್ತು ಏ ಗಳ ಧ್ವನಿ, ಓ ಮತ್ತು ಔ ಗಳ ಧ್ವನಿಯ ನೈಜ ಉಚ್ಚಾರಣೆಯ ಮಾಡಲಾಗುತ್ತಿಲ್ಲ, ಶ ಮತ್ತು ಸ ಗಳನ್ನು ಒಂದೇ ರೀತಿಯಲ್ಲಿ ಉಚ್ಚರಿಸಲಾಗುತ್ತದೆ. 'ಪೌಧಾ' ಪದವನ್ನು ಸಾಮಾನ್ಯವಾಗಿ 'ಪಾಧಾ' ಎನ್ನುವ ರೀತಿಯಲ್ಲಿ ಉಚ್ಚರಿಸಲಾಗುತ್ತದೆ. 'ಪೈಸಾ' ವನ್ನು 'ಪೇಸಾ' ಅಥವಾ 'ಪಯ್ಸಾ' ಎಂದೂ, 'ಕೃಪಾ' ಪದವನ್ನು 'ಕ್ರಿಪಾ' ಅಥವಾ 'ಕ್ರಪಾ' ಎನ್ನಲಾಗುತ್ತದೆ. ಹೀಗೆ ಶಿಕ್ಷಕರು ಹಲವು ಪದಗಳನ್ನು ತಪ್ಪಾಗಿ ಉಚ್ಚರಿಸುವುದರಿಂದಾಗಿ ಮಕ್ಕಳು ಉಕ್ತಲೇಖನವನ್ನು ಸರಿಯಾದ ರೀತಿಯಲ್ಲಿ ಬರೆಯಲು ಆಗುತ್ತಿಲ್ಲ. ಅಂದರೆ ಪದಗಳ ಉಚ್ಚಾರಣೆಯನ್ನು ನಾವು ತಪ್ಪಾಗಿ ಮಾಡಿದರೂ ಆ ತಪ್ಪು ಉಚ್ಚಾರಣೆಯನ್ನು ಕೇಳಿಸಿಕೊಂಡು ಮಕ್ಕಳು ಪದಗಳನ್ನು ಸರಿಯಾಗಿ ಬರೆಯಬೇಕೆಂದು ನಾವು ನಿರೀಕ್ಷಿಸುತ್ತೇವೆ. ಇದು ಅತಿಯೆನಿಸುವುದಿಲ್ಲವೇ? ಇದಕ್ಕೆ ಪರಿಹಾರವೆಂದರೆ ಕ್ರಿಪಾ, ಕ್ರಪಾ ಅಥವಾ ಕಿರ್ ಪಾ ಹೀಗೆ ಹೇಳಲಾಗುವ ಪದಗಳನ್ನು ಕೃಪಾ ಎಂದೇ ಬರೆಯಬೇಕೆಂದು ಮಕ್ಕಳಿಗೆ ಹೇಳಿಬಿಡುವುದು. ಅಂದರೆ ಪದದ ಸರಿಯಾದ ಕಾಗುಣಿತವನ್ನು ಕಲಿಯುವ ಕಡೆಗೆ ನಾವು ಗಮನ ಕೊಡಬೇಕು. ಇದರ ಜೊತೆಗೆ ಉಚ್ಚಾರಣೆಯಲ್ಲಿ ಸುಧಾರಣೆ ತರಬೇಕಾದ ಅಗತ್ಯವಿದ್ದಲ್ಲಿ ಅದನ್ನು ಮೊದಲು ನಾವೇ ಕಾರ್ಯರೂಪಕ್ಕೆ ತರಲು ಆರಂಭಿಸಬೇಕು. ಏಕೆಂದರೆ ಮಕ್ಕಳು ಉಚ್ಚಾರಣೆಯನ್ನು ಕೇಳಿಸಿಕೊಂಡು ಕೂಡ ಕಲಿಯುತ್ತಾರೆ.

ಈಗ ಉಚ್ಚಾರಣೆಯ ದೋಷಗಳನ್ನು ಸರಿಪಡಿಸುವುದು ಹೇಗೆ ಎಂದು ಚರ್ಚಿಸೋಣ. ಸಮಯ ಕಳೆದಂತೆ ಉಚ್ಚಾರಣೆಯ ಹಲವಾರು ದೋಷಗಳು ತಾನಾಗಿಯೇ ಸರಿಹೋಗುತ್ತವೆಂದು ಅನುಭವ ಹೇಳುತ್ತದೆ. ಕೆಲವೊಮ್ಮೆ ಶಿಕ್ಷಕರು ಅಥವಾ ಇತರ ಹಿರಿಯರು ಮಕ್ಕಳ ಗಮನವನ್ನು ಸರಿಯಾದ ಉಚ್ಚಾರಣೆಯ ಕಡೆಗೆ ಸೆಳೆಯುವುದರಿಂದ, ಮತ್ತೆ ಕೆಲವು ಬಾರಿ ತಮ್ಮ ಸಹಪಾಠಿಗಳು ಗಮನ ಸೆಳೆಯುವುದರಿಂದೂ ಉಚ್ಚಾರಣೆಯ ದೋಷಗಳು ಸರಿ ಹೋಗಬಹುದು. ಒಮ್ಮೆ ಮಕ್ಕಳಿಗೆ ಅರಿವಾದ ನಂತರ ಆ ಧ್ವನಿಗಳನ್ನು ಮತ್ತೆ ಮತ್ತೆ ಕೇಳುತ್ತಾ ಹಾಗೂ ಮಾತನಾಡುತ್ತಾ ತಮ್ಮ ಧ್ವನಿಪೆಟ್ಟಿಗೆಯನ್ನು ಆ ಧ್ವನಿಗಳಿಗೆ ಹೊಂದಿಸಿಕೊಳ್ಳಲು ಸಾಧ್ಯವಾಗುತ್ತದೆ. ಆದರೆ ಇದೆಲ್ಲವು ಕೆಲವು ದಿನ ಅಥವಾ ಕೆಲವೇ ತಿಂಗಳುಗಳಲ್ಲಿ ಆಗಿಬಿಡುವಂಥದ್ದಲ್ಲ.. ಪ್ರಾಯಶಃ ಅದಕ್ಕೆ ವರ್ಷಗಳೇ ಹಿಡಿಯಬಹುದು. ಹಾಗಾಗಿ ತಪ್ಪು ಉಚ್ಚಾರಣೆಗಾಗಿ ಮಕ್ಕಳನ್ನು ನಿರಂತರವಾಗಿ ದಂಡಿಸುವುದು ಅಥವಾ ಅಪಮಾನಗೊಳಿಸುವುದರಿಂದ ಖಂಡಿತ ಯಾವುದೇ ಪ್ರಯೋಜನ ಆಗಲಾರದು. ಭಯಪಡಿಸುವ ಮತ್ತು ಅವಮಾನಿಸುವ ವಾತಾವರಣದಲ್ಲಿ ಕಲಿಕೆಯು ಖಂಡಿತವಾಗಿಯೂ ಸಾಧ್ಯವಾಗಲಾರದು. ಅದರ ಬದಲಿಗೆ ಶಿಕ್ಷಕರ ಮೂಲಕ ಒಂದು ಬಾರಿ ಸೂಚನೆ ನೀಡಿ ಮಕ್ಕಳಲ್ಲಿ ಅರಿವು ಮೂಡಿಸಿದ ನಂತರ ಮಕ್ಕಳು ತಾವಾಗಿಯೇ ಆ ದೋಷಗಳಿಂದ ಮುಕ್ತರಾಗಲು ಪ್ರಯತ್ನಿಸುವಂತೆ ಮಾಡುವುದು ಹಾಗೂ ಅದರಲ್ಲಿ ಯಶಸ್ವಿಯಾಗುವಂತೆ ಮಾಡುವುದು ಸೂಕ್ತ.

ಅಲ್ಲದೆ ಒಂದು ತರಗತಿಯಲ್ಲಿ ಎರಡರಿಂದ ಅಥವಾ ಮೂರು ಶೇಕಡಾದಷ್ಟು ಮಕ್ಕಳು ಮಾತ್ರ ಉಚ್ಚಾರಣೆಯಲ್ಲಿ ತಪ್ಪು ಮಾಡುತ್ತಿದ್ದರೆ ಹಾಗೂ ಅದರ ಹೊರತಾಗಿಯೂ ಅವರು ಭಾಷೆಯ ಕೌಶಲ್ಯಗಳನ್ನು ಸುಲಭವಾಗಿ

ರಕ್ತಗತಗೊಳಿಸಿಕೊಳ್ಳುತ್ತಿದ್ದರೆ, ಈ ಸಾಧನೆ ಸಾಕಾಗದೇ? ಒಂದು ವೇಳೆ ಅವರು ಹೇಳುವ ಮಾತುಗಳು ಅರ್ಥವಾಗುತ್ತಿದ್ದಲ್ಲಿ ಸಂಭಾಷಣೆಯ ಉದ್ದೇಶವು ಪೂರ್ಣವಾಗಿ ಈಡೇರುತ್ತಿದೆ ಎಂದೇ ಅರ್ಥವಲ್ಲವೇ? ಹೀಗೆ ಮಾಡಬಹುದು, ಮಕ್ಕಳು ತಪ್ಪಾಗಿ ಉಚ್ಚರಿಸುತ್ತಿರುವ ಪದಗಳ ಸರಿಯಾದ ರೂಪವನ್ನು ಅವರಿಗೆ ಮತ್ತೆ ಮತ್ತೆ ಕೇಳಿಸಿಕೊಳ್ಳುವ ಅವಕಾಶವನ್ನು ಒದಗಿಸಬಹುದು. ಅಂತಹ ಸಂದರ್ಭಗಳಲ್ಲಿ ಮಕ್ಕಳನ್ನು ಅಪಮಾನಿಸದೆ, ಅವರನ್ನು ಅಪರಾಧಿಗಳಂತೆ ನಡೆಸಿಕೊಳ್ಳದೆ ಇದ್ದರೆ ಆ ತಪ್ಪುಗಳನ್ನು ತಿದ್ದುವುದಕ್ಕೆ ಸಾಧ್ಯವಿದೆ. ಇದಕ್ಕಾಗಿ ತರಗತಿಯಲ್ಲಿನ ಬಹುತೇಕ ಮಕ್ಕಳು ತಪ್ಪು ಉಚ್ಚಾರಣೆ ಮಾಡುತ್ತಿರುವ ಪದಗಳ ಪಟ್ಟಿಯನ್ನು ತಯಾರಿಸಿ, ಆ ಪದಗಳನ್ನು ಯಾವುದಾದರೂ ಕಥೆ ಅಥವಾ ಪಠ್ಯದಲ್ಲಿ ಸಾಂದರ್ಭಿಕವಾಗಿ ಸೇರಿಸಿ ಮಕ್ಕಳು ಮತ್ತೆ ಮತ್ತೆ ಕೇಳಿಸಿಕೊಳ್ಳುವಂತೆ ಹಾಗೂ ನೋಡುವಂತೆ ಮಾಡಬಹುದು. ಮಕ್ಕಳು ಪದಗಳನ್ನು ಕೇಳಿಸಿಕೊಳ್ಳುವ ಹಾಗೂ ನೋಡುವುದರ ನಡುವೆ ಸಮನ್ವಯತೆಯನ್ನು ತಂದರೆ ಉಚ್ಚಾರಣೆಯ ತಪ್ಪುಗಳನ್ನು ತಿದ್ದುವ ಕೆಲಸ ಬಹಳಷ್ಟು ಸುಲಭವಾಗುತ್ತದೆ. ಅಲ್ಲದೆ ಮಕ್ಕಳು ಪದವನ್ನು ತಪ್ಪಾಗಿ ಉಚ್ಚರಿಸಿದಾಗ ಶಿಕ್ಷಕರು ಆ ತಪ್ಪನ್ನು ಎತ್ತಿ ತೋರಿಸದೇ ಆ ಪದವನ್ನು ಸರಿಯಾದ ರೀತಿಯಲ್ಲಿ ಉಚ್ಚರಿಸುವಂತಹ ಕೆಲಸವನ್ನು ಮಾಡಬಹುದು.

ಆದರೆ ಇವೆಲ್ಲ ಆದ ನಂತರವೂ ಉಚ್ಚಾರಣೆಯಲ್ಲಿ ಸುಧಾರಣೆ ಆಗಲಿಲ್ಲವೆಂದರೆ ಇದಕ್ಕೆ ಹೆಚ್ಚಿನ ಸಮಯ ಹಿಡಿಯುತ್ತದೆ ಎಂಬುದನ್ನು ನಾವು ಅರ್ಥಮಾಡಿಕೊಳ್ಳಬೇಕು. ವಸ್ತುಸ್ಥಿತಿ ಹೀಗಿರುವಾಗ ನಾವು ನಮ್ಮ ಗಮನವನ್ನು ಭಾಷೆಯ ಇತರೆ ಕೌಶಲ್ಯಗಳನ್ನು ಅಭಿವೃದ್ಧಿಪಡಿಸುವ ಕಡೆಗ ೇಕೆ ಹರಿಸಬಾರದು?

**ಉಚ್ಚಾರಣೆಯ ದೋಷಗಳು: ನಮ್ಮ ಗ್ರಹಿಕೆ**

ನನಗೆ ಅರ್ಥವಾದಾಗಿನಿಂದ, ಶಿಕ್ಷಕರು ತರಗತಿಯಲ್ಲಿ ಹಿಂದಿಯನ್ನು ಕಲಿಸುವಾಗ ಬೋಧನೆಗಿಂತಲೂ ಉಚ್ಚಾರಣೆಗೆ ಹೆಚ್ಚಿನ ಒತ್ತನ್ನು ನೀಡುತ್ತಿದ್ದಾರೆ. ಶಿಕ್ಷಕರ ಪ್ರಕಾರ ಯಾವ ಮಕ್ಕಳ ಉಚ್ಚಾರಣೆಯನ್ನು ಸರಿಪಡಿಸಲು ಸಾಧ್ಯವಿಲ್ಲವೋ ಅವರ ಮೇಲೆ ಬಹಳಷ್ಟು ಸಮಯ ಮತ್ತು ಶ್ರಮವನ್ನು ವ್ಯಯಿಸಲಾಗುತ್ತಿರುವದನ್ನು ನಾನು ನೋಡಿದೆ. ನನ್ನ ತರಗತಿಯಲ್ಲಿ ಬಹಳಷ್ಟು ಮಕ್ಕಳು ಬುಂದೇಲಿ ಭಾಷೆಯನ್ನು ಮಾತನಾಡುವವರಾಗಿದ್ದು ಅವರು ಬಳಸುವ ಬಹಳಷ್ಟು ಪದಗಳು ಅವರ ಸ್ಥಳೀಯ ಭಾಷೆಯಿಂದ ಪ್ರಭಾವಿತವಾಗಿದ್ದವು. ಅದೃಷ್ಟವಶಾತ್, ನನ್ನ ಉಚ್ಚಾರಣೆ ಶಿಕ್ಷಕರ ದೃಷ್ಟಿಯಲ್ಲಿ ಸರಿಯಾಗಿತ್ತು. (ಇದಕ್ಕೆ ನನ್ನ ಮಾತೃಭಾಷೆ ಮರಾಠಿಯ ಕೊಡುಗೆ ಗಮನಾರ್ಹವಾಗಿದೆ. ಏಕೆಂದರೆ ಅದರಲ್ಲಿನ ಧ್ವನಿಗಳು ಬಹುತೇಕ ಹಿಂದಿ, ಸಂಸ್ಕೃತ ಮತ್ತು ಇಂಗ್ಲಿಷ್ ನೊಂದಿಗೆ ಬಹಳಷ್ಟು ಸಾಮ್ಯತೆಯನ್ನು ಹೊಂದಿವೆ.) ಹೀಗಾಗಿ ತರಗತಿಯಲ್ಲಿ ಪಾಠವನ್ನು ಓದುವಂತೆ ನನಗೆ ಆಗಾಗ್ಗೆ ಹೇಳಲಾಗುತ್ತಿತ್ತು ಹಾಗೂ ಉಳಿದ ಮಕ್ಕಳಿಗೆ ಅದನ್ನು ಅನುಸರಿಸುವಂತೆ ಸೂಚಿಸಲಾಗುತ್ತಿತ್ತು. ವರ್ಷಾನುಗಟ್ಟಲೆ ಈ ಪ್ರಕ್ರಿಯೆ ನಡೆಯುತ್ತಲೇ ಇತ್ತು. ಅಷ್ಟಾದರೂ ಆರರಿಂದ ಎಂಟನೇ ತರಗತಿಗೆ ಹೋದ ನಂತರವೂ ಆ ಮಕ್ಕಳ ಉಚ್ಚಾರಣೆಯಲ್ಲಿ ಯಾವುದೇ ಬದಲಾವಣೆ ಆಗಲಿಲ್ಲ.

ಅಧ್ಯಾಪನ ಕಾರ್ಯವನ್ನು ವೃತ್ತಿಯಾಗಿ ಸ್ವೀಕರಿಸಿ ಹಿಂದಿ ವಿಷಯವನ್ನು ಬೋಧಿಸುವ ಸಮಯದಲ್ಲಿ ನನಗೂ ಈ ಸಮಸ್ಯೆ ಒಂದಿಷ್ಟು ಕಾಡಿತು. ಆ ಸಂದರ್ಭದಲ್ಲಿ ನಮ್ಮ ಶಿಕ್ಷಕರು ಹಿಂದೆ ಅಳವಡಿಸಿಕೊಂಡಿದ್ದ ಪ್ರಕ್ರಿಯೆಗಳು ಹಾಗೂ ಅವುಗಳ ವಿಫಲತೆಯ ಅರಿವಿತ್ತು. ಅಲ್ಲದೆ ಉಚ್ಚಾರಣೆಯನ್ನು ಸುಧಾರಿಸಲು ಆ ರೀತಿಯ ದಂಡಿಸುವ, ಅಪಮಾನಿಸುವ ಪ್ರಕ್ರಿಯೆಯಿಂದ ಕೆಲಸ ಆಗುವುದಿಲ್ಲ ಎಂಬ ಅರಿವು ನನಗೆ ಬಂದಿತ್ತು. ಜೊತೆಗೆ ಭಾಷೆಯ ಮುಖ್ಯ ಕಾರ್ಯ ಒಬ್ಬರು ಮತ್ತೊಬ್ಬರ ಮಾತನ್ನು ಅರ್ಥಮಾಡಿಕೊಳ್ಳುವುದಾಗಿದ್ದು ಆ ಕಾರ್ಯದಲ್ಲಿ ಉಚ್ಚಾರಣೆಯ ದೋಷ ಅಷ್ಟೇನೂ ಅಡ್ಡಿಯಾಗುತ್ತಿಲ್ಲ, ಅಂದರೆ ಆಡುವ ಮಾತು ಅರ್ಥವಾಗುತ್ತಿದೆ ಎ ಂದಾದರೆ ನಾವೇಕೆ ಈ ಉಚ್ಚಾರಣೆಯ ವಿಚಾರವನ್ನು ಸ್ವಲ್ಪ ಪಕ್ಕಕ್ಕಿಟ್ಟು ಭಾಷೆಯನ್ನು ಕಲಿಯುವ ಇತರೆ ಆಯಾಮಗಳ ಮೇಲೆ ಕೆಲಸ ಮಾಡಬಾರದು? ಈ ನಿಟ್ಟಿನಲ್ಲಿ ಕೆಲವು ಪ್ರಯತ್ನಗಳನ್ನು ಕೈಗೊಂಡು ಅದರಿಂದ ನನಗೆ ಭಾಷೆಯ ಕಲಿಕೆಯಲ್ಲಿ ಉಚ್ಚಾರಣೆಯ ಹೊರತಾಗಿಯೂ ಇನ್ನೂ ಬಹಳಷ್ಟು ಮಹತ್ವಪೂರ್ಣ ಸಂಗತಿಗಳಿವೆ ಎನ್ನುವ ಸಂಗತಿ ಅರ್ಥವಾಯಿತು.

ಕಳೆದ ಐದು ದಶಕಗಳಲ್ಲಿ ಶಿಕ್ಷಕರೊಂದಿಗೆ ಓದುವ-ಬರೆಯುವ ಪ್ರಕ್ರಿಯೆಯ ಮೇಲೆ ಕಾರ್ಯ ನಿರ್ವಹಿಸುವ ಸಮಯದಲ್ಲಿ ನನಗೆ ಅವರಲ್ಲಿನ ಉಚ್ಚಾರಣೆಯ ಕುರಿತ ಬೇಡಿಕೆ ಅರಿವಿಗೆ ಬಂತು. ಅದರ ಜೊತೆಯಲ್ಲಿಯೇ ಅರ್ಥಮಾಡಿಕೊಳ್ಳುವುದಕ್ಕೂ ಇದಕ್ಕೂ ಯಾವುದೇ ಸಂಬಂಧವಿಲ್ಲದಿದ್ದರೂ ಕೇವಲ ಉಚ್ಚಾರಣೆಯು ಸರಿಯಾಗಿರುವುದನ್ನೇ ಓದುವ ದಕ್ಷತೆಯೆಂದು ಭಾವಿಸಲಾಗುತ್ತದೆ ಎನ್ನುವುದೂ ತಿಳಿಯಿತು. ಹೀಗೆಯೇ ಮುಂದುವರಿದು ಮಾಧ್ಯಮಿಕ ತರಗತಿಗಳಲ್ಲಿಯೂ ಪ್ರತಿ ವಿಷಯವನ್ನು ವಾಚಿಕ ಅಥವಾ ಬಾಯಿಪಾಠವನ್ನು ತರಗತಿಯ ಪ್ರಕ್ರಿಯೆಯ ಅನಿವಾರ್ಯ ಅಂಗವಾಗಿ ಮಾಡಲಾಗಿದೆ. ಹಾಗೂ ಈ ಪ್ರಕ್ರಿಯೆಯಲ್ಲಿ ಮೌನವಾಗಿ ಓದುವುದು ಅಂದರೆ ತಾನೇ ಸ್ವತಃ ಓದಿ ಅರ್ಥ ಮಾಡಿಕೊಳ್ಳುವುದಕ್ಕೆ ಅವಕಾಶ ಇಲ್ಲವೇ ಇಲ್ಲ ಎನ್ನುವಂಥ ಸ್ಥಿತಿ ಇದೆ. ಇದರ ಕುರಿತು ಮಾತನಾಡಿದಾಗ ಶಿಕ್ಷಕರು ಕಟುವಾಗಿ ವಿರೋಧಿಸುವುದೂ ಅರಿವಿಗೆ ಬಂದಿದೆ. ಬಹುಶಃ ಒಬ್ಬರ ಊಹೆಗಳನ್ನು ತಪ್ಪೆಂದು ಸಾಬೀತುಪಡಿಸುವುದು ಸಾಮಾನ್ಯವಾಗಿ ಯಾವಾಗಲೂ ಕಠಿಣ ಕಾರ್ಯವಾಗಿರುತ್ತದೆ.

ಕಾರ್ಯಾಗಾರಗಳು ಹಾಗೂ ಇನ್ನಿತರೆ ಸಭೆಗಳಲ್ಲಿ ಆದ ಮಾತುಕತೆಗಳಿಂದ ನಾವು ಉಚ್ಚಾರಣೆ ಸರಿಯಾಗಲಿಲ್ಲವೆಂದರೆ ಮಕ್ಕಳ ಇಡೀ ಅಸ್ತಿತ್ವವನ್ನೇ ಅಣಕಿಸಿ ಆಡಿಕೊಳ್ಳಲಾಗುತ್ತದೆ ಎಂಬ ಸಂಗತಿಯನ್ನು ಅರ್ಥಮಾಡಿಕೊಂಡೆವು. 'ಹೇಗೆ ಮಾತನಾಡುತ್ತಿದ್ದೀಯ? ಹೇಗೆ ಓದುತ್ತಿದ್ದೀಯ?' ಎನ್ನುವ ವಾಕ್ಯಗಳು ಮಕ್ಕಳ ಶಾಲಾ ಜೀವನದ ಅವಿಭಾಜ್ಯ ಅಂಗವಾಗಿಬಿಡುತ್ತವೆ. ತರಗತಿಯಲ್ಲಿ ಭಾಷಾ ಶಿಕ್ಷಣದ ಇತರ ಕೌಶಲ್ಯಗಳು ಈ ಉಚ್ಚಾರಣಾ ಕೌಶಲ್ಯ(??) ದ ಮುಂದೆ ಗೌಣವಾಗಿ ಬಿಡುತ್ತವೆ. ಈ ಲೇಖನವು ಇಂತಹುದೇ ಅನುಭವಗಳ ಫಲವಾಗಿದೆ.

***

**ಸಂದರ್ಭ:**

ಓದು - ಒಂದು ಮನೋಭಾಷಿಕ ಕಲ್ಪನೆ ಬೆಳೆಸುವ ಆಟ - ಓದುವುದು ಎಂದರೆ ಅರ್ಥಮಾಡಿಕೊಳ್ಳುವುದು (ಎನ್.ಸಿ.ಇ.ಆರ್.ಟಿ) - ರಮಾಕಾಂತ ಅಗ್ನಿಹೋತ್ರಿ, ಮಕ್ಕಳಲ್ಲಿ ಭಾಷೆ ಕಲಿಯುವ ಸಾಮರ್ಥ್ಯ - 2

*****

**ಲೇಖಕರು:**

**ಭಾರತಿ ಪಂಡಿತ್**: ಇವರು ಎರಡು ದಶಕಗಳಿಂದ ಶಾಲಾ ಶಿಕ್ಷಣದಲ್ಲಿ ತೊಡಗಿಕೊಂಡಿದ್ದು, ಪ್ರಸ್ತುತ ಅಜೀಂ ಪ್ರೇಮ್‌ಜಿ ಫೌಂಡೇಶನ್, ಭೋಪಾಲ್ (ಮಧ್ಯಪ್ರದೇಶ) ನಲ್ಲಿ ಕಾರ್ಯನಿರತರಾಗಿದ್ದಾರೆ.

ಸಂಪರ್ಕ: bharati.pandit@azimpremjifoundation.org